## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2033
ಸದಸ್ಯರ ಹೆಸರು : ಶ್ರೀ ಐವನ್ ಡಿ'ಸೋಜಾ (ನಾಮ ನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 27.03.2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಎಷ್ಟು ಗ್ರಾಮ ಪಂಚಾಯತ್‌ಗಳಿವೆ; ಎಷ್ಟಕ್ಕೆ ಸ್ವಂತ ಕಟ್ಟಡಗಳನ್ನು ಒದಗಿಸಲಾಗಿದೆ; ಸರ್ಕಾರದಿಂದ ಗ್ರಾಮ ಪಂಚಾಯತ್ ಕಟ್ಟಡಕ್ಕೆ ಎಷ್ಟು ಹಣ ಮೀಸಲಿರಿಸಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಪ್ರಸ್ತುತ 6012 ಗ್ರಾಮ ಪಂಚಾಯತಿಗಳಿವೆ. 5550 ಗ್ರಾಮ ಪಂಚಾಯತಿಗಳು ಸ್ವಂತ ಕಟ್ಟಡಗಳನ್ನು ಹೊಂದಿರುತ್ತವೆ.<br><br>ಹೊಸ ಗ್ರಾಮ ಪಂಚಾಯತಿಗಳಿಗೆ ಕಛೇರಿ ಕಟ್ಟಡಗಳನ್ನು ನಿರ್ಮಿಸಲು ರೂ 40.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಯೋಜನೆ ರೂಪಿಸಲಾಗಿದೆ. ಈ ಪೈಕಿ ಸರ್ಕಾರದ ಅನುದಾನ ರೂ.20.00 ಲಕ್ಷ, ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ರೂ.16.25 ಲಕ್ಷ ಹಾಗೂ 14ನೇ ಹಣಕಾಸು ಯೋಜನೆ ಅಥವಾ ಗ್ರಾಮ ಪಂಚಾಯತಿಗಳ ಸ್ವಂತ ಸಂಪನ್ಮೂಲದಡಿ ಉಳಿಕೆಯಾಗಿರುವ ರೂ.3.75 ಲಕ್ಷಗಳನ್ನು ಬಳಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.<br><br>ಈ ಉದ್ದೇಶಕ್ಕಾಗಿ ಮೊದಲ ಹಂತದಲ್ಲಿ 461 ಗ್ರಾಮ ಪಂಚಾಯತಿಗಳಿಗೆ ತಲಾ 1 ಗ್ರಾಮ ಪಂಚಾಯತಿಗೆ ರೂ.10.00 ಲಕ್ಷದಂತೆ ಒಟ್ಟು ರೂ. 46.10 ಕೋಟಿಗಳನ್ನು ಸರ್ಕಾರದಿಂದ ಬಿಡುಗಡೆ ಮಾಡಲಾಗಿದೆ.<br><br>ಎರಡನೇ ಹಂತದಲ್ಲಿ ಈಗಾಗಲೇ ಮೊದಲ ಕಂತಿನ ಅನುದಾನ ಬಿಡುಗಡೆ ಮಾಡಿರುವ ಒಟ್ಟು 59 ಗ್ರಾಮ ಪಂಚಾಯತಿಗಳಿಗೆ ತಲಾ ಒಂದು ಗ್ರಾಮ ಪಂಚಾಯತಿಗೆ ರೂ.10.00 ಲಕ್ಷದಂತೆ ರೂ.5.90 ಕೋಟಿಗಳ ಅನುದಾನ ಬಿಡುಗಡೆ ಮಾಡಲಾಗಿದೆ. ಅಂದರೆ ಒಟ್ಟು 59 ಗ್ರಾಮ ಪಂಚಾಯತಿಗಳಿಗೆ ಪ್ರತಿ ಗ್ರಾಮ ಪಂಚಾಯತಿಗೆ ರೂ.20.00 ಲಕ್ಷಗಳ ಅನುದಾನ ನೀಡಲಾಗಿದೆ. |
| (ಆ) | ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಗ್ರಾಮ ಪಂಚಾಯತ್‌ಗಳಿಗೆ ವರ್ಷವೊಂದಕ್ಕೆ ಸಿಗುವ ಒಟ್ಟು ಹಣ ಎಷ್ಟು; ಯಾವ ಯಾವ ಉದ್ದೇಶಗಳಿಗಾಗಿ ನೀಡಲಾಗುತ್ತದೆ; (ವಿವರ ನೀಡುವುದು) | ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಗ್ರಾಮ ಪಂಚಾಯತಿಗಳಿಗೆ ವಾರ್ಷಿಕವಾಗಿ ಸಿಗುವ ಅನುದಾನದ ವಿವರ ಈ ಕೆಳಕಂಡಂತಿದೆ. |

| ಕ್ರಸಂ. | ಯೋಜನೆ / ಕಾರ್ಯಕ್ರಮ | ಅನುದಾನದ ಮೊತ್ತ |
|---|---|---|
| 1 | ಶಾಸನಬದ್ಧ ಅನುದಾನ | ರೂ.10.00–12.00 ಲಕ್ಷಗಳು. |
| 2 | 14ನೇ ಹಣಕಾಸು ಆಯೋಗದ ಅನುದಾನ | ಜನ ಸಂಖ್ಯೆ ಮತ್ತು ಭೌಗೋಳಿಕ ಪ್ರದೇಶದ ಆಧಾರದ ಮೇಲೆ ರೂ. 15.00– 25.00 ಲಕ್ಷಗಳು. |
| 3 | ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ | ಪ್ರತಿ ಗ್ರಾಮ ಪಂಚಾಯಿತಿಯಲ್ಲಿನ ಕಾರ್ಮಿಕ ಆಯವ್ಯಯ ಆಧರಿಸಿ ಅನುದಾನ ನೀಡಲಾಗುತ್ತಿದೆ. |
| 4 | ಸ್ವಚ್ಚ ಭಾರತ್ ಮಿಷನ್ | ಶೌಚಾಲಯ ನಿರ್ಮಿಸಿಕೊಳ್ಳಲು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಫಲಾನುಭವಿಗೆ ರೂ.15,000/– ಮತ್ತು ಸಾಮಾನ್ಯ ಫಲಾನುಭವಿಗೆ ರೂ.12,000/–ಗಳು |
| 5 | ಮುಖ್ಯ ಮಂತ್ರಿ ಗ್ರಾಮ ವಿಕಾಸ ಯೋಜನೆ | ಆಯ್ಕೆಯಾದ ಗ್ರಾಮ ಒಂದಕ್ಕೆ ಒಂದು ಕೋಟಿ ರೂಪಾಯಿಗಳು |

| | | |
|---|---|---|
| | | ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಬಹುದಾಗಿದೆ. |
| (ಇ) | ಗ್ರಾಮ ಪಂಚಾಯತ್‌ಗಳಲ್ಲಿ ಸಿಬ್ಬಂದಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸಿಬ್ಬಂದಿಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ರಾಜ್ಯದ ಕೆಲವು ಗ್ರಾಮ ಪಂಚಾಯತಿಗಳಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿ, ಗ್ರಾಮ ಪಂಚಾಯತಿ ಕಾರ್ಯದರ್ಶಿ ಮತ್ತು ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳು ಖಾಲಿ ಇರುತ್ತವೆ.<br><br>ಗ್ರಾಮ ಪಂಚಾಯಿತಿಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ಹಾಲಿ ಗ್ರಾಮ ಪಂಚಾಯತಿಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದ, ಗ್ರಾಮ ಪಂಚಾಯತಿ ಕಾರ್ಯದರ್ಶಿ ವೃಂದ ಮತ್ತು ದ್ವಿತೀಯ ದರ್ಜೆ ಲೆಕ್ಕ ಸಹಾಯಕ ವೃಂದದ ನೌಕರರನ್ನು ಹೆಚ್ಚುವರಿ ಪ್ರಭಾರದಲ್ಲಿರಿಸಲು ಕ್ರಮ ವಹಿಸಲಾಗಿದೆ.<br><br>ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದಕ್ಕೆ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ನೇಮಕಾತಿ ಪ್ರಾಧಿಕಾರ ಆಗಿದ್ದು ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-1 ವೃಂದದ ಅರ್ಹ ನೌಕರರು ಲಭ್ಯವಾದಂತೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿ ಮೂಲಕ ಭರ್ತಿ ಮಾಡಲು ಮತ್ತು ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಗ್ರೇಡ್-1 ಮತ್ತು ಗ್ರೇಡ್-2 ವೃಂದಕ್ಕೆ ಜಿಲ್ಲಾ ಪಂಚಾಯಿತಿಗಳ ಉಪ ಕಾರ್ಯದರ್ಶಿ (ಅಭಿವೃದ್ಧಿ) ರವರು ನೇಮಕಾತಿ ಪ್ರಾಧಿಕಾರ ಆಗಿದ್ದು ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-2 ವೃಂದದ ಅರ್ಹ ನೌಕರರು ಲಭ್ಯವಾದಂತೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿ ಮೂಲಕ ಭರ್ತಿ ಮಾಡಲು ಸರ್ಕಾರದಿಂದ ಈಗಾಗಲೇ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br><br>ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಸರ್ಕಾರ ಶಾಖೆ) (ಗ್ರಾಮ ಪಂಚಾಯತಿ ಕಾರ್ಯದರ್ಶಿ ಕಮ್ ಗ್ರಾಮೀಣಾಭಿವೃದ್ಧಿ ಸಹಾಯಕ ಗ್ರೇಡ್-2 ಮತ್ತು ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ನೇಮಕಾತಿ) (ವಿಶೇಷ) ನಿಯಮಗಳು, 2019 ರನ್ವಯ ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-2 ವೃಂದದ ನೇರ ನೇಮಕಾತಿ ಕೋಟಾದ ಉಳಿಕೆ ವೃಂದ 263 ಮತ್ತು ಹೈದರಾಬಾದ್ ಕರ್ನಾಟಕ ವೃಂದದ 87 ಹುದ್ದೆಗಳು ಸೇರಿದಂತೆ ಒಟ್ಟು 350 ಹುದ್ದೆಗಳು ಮತ್ತು ದ್ವಿತೀಯ ದರ್ಜೆ ಲೆಕ್ಕ ಸಹಾಯಕ ವೃಂದದ ನೇರ ನೇಮಕಾತಿ ಕೋಟಾದ ಉಳಿಕೆ ವೃಂದ 55 ಮತ್ತು ಹೈದರಾಬಾದ್ ಕರ್ನಾಟಕ ವೃಂದದ 96 ಹುದ್ದೆಗಳು ಸೇರಿದಂತೆ ಒಟ್ಟು 151 ಹುದ್ದೆಗಳಿಗೆ ನೇಮಕಾತಿ ಮಾಡಲಾಗುತ್ತದೆ. |

ಸಂ. ಗ್ರಾಅಪ 330 ಗ್ರಾಪಂಅ 2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು